## ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: | 303 |
| ಸದಸ್ಯರ ಹೆಸರು | ಶ್ರೀ. ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ: | 09.12.2020 |
| ಉತ್ತರಿಸುವ ಸಚಿವರು: | ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | 2018-19 ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆಯ ವತಿಯಿಂದ ಲೆಕ್ಕಶೀರ್ಷಿಕೆ: 5054-04-337-0-01-154 ರಡಿ ನಾಗಮಂಗಲ ತಾಲ್ಲೂಕಿನ ಕಾಂತಾಪುರ ಮಾರ್ಗ ರಾಜ್ಯ ಹೆದ್ದಾರಿ-19 (ಎನ್.ಹೆಚ್.-150ಎ) ಅನ್ನು ಹೊಣಕೆರೆ ಬಳಿ ಸೇರುವ ಜಿಲ್ಲಾ ಮುಖ್ಯ ರಸ್ತೆ ಮತ್ತು ನಾಗಮಂಗಲ ತಾಲ್ಲೂಕು ದೇವಲಾಪುರ - ಮಾರ್ಕೋನಹಳ್ಳಿ ಸೇರುವ ಜಿಲ್ಲಾ ಮುಖ್ಯ ರಸ್ತೆಯ ರಾಜ್ಯ ಹೆದ್ದಾರಿ ರಸ್ತೆಯ ಅಭಿವೃದ್ಧಿಪಡಿಸುವ ಕಾಮಗಾರಿಯನ್ನು ರೂ. 750.00 ಲಕ್ಷಗಳಿಗೆ ಮಂಜೂರಾಗಿ ಪ್ರಸ್ತುತ ಕಾಮಗಾರಿ ಪೂರ್ಣಗೊಳಿಸಬೇಕಾದ ಸಮಯ ಮುಗಿದರೂ ಇನ್ನೂ ಕಾಮಗಾರಿ ಪೂರ್ಣಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | • 2018-19 ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ: 5054-04-337-0-01-154 ರಡಿ ನಾಗಮಂಗಲ ತಾಲ್ಲೂಕಿನ ಕಾಂತಾಪುರ ಮಾರ್ಗ ರಾಜ್ಯ ಹೆದ್ದಾರಿ-19 (ಎನ್.ಹೆಚ್.-150ಎ) ಅನ್ನು ಹೊಣಕೆರೆ ಬಳಿ ಸೇರುವ ಜಿಲ್ಲಾ ಮುಖ್ಯ ರಸ್ತೆ ಮತ್ತು ನಾಗಮಂಗಲ ತಾಲ್ಲೂಕು ದೇವಲಾಪುರ - ಮಾರ್ಕೋನಹಳ್ಳಿ ಸೇರುವ ಜಿಲ್ಲಾ ಮುಖ್ಯ ರಸ್ತೆ ಅಭಿವೃದ್ಧಿಪಡಿಸುವ ಕಾಮಗಾರಿಯನ್ನು ರೂ.750.00 ಲಕ್ಷಗಳ ಮೊತ್ತದಲ್ಲಿ ಕೈಗೊಳ್ಳಲು ಶ್ರೀ.ಬಾಪೂಜಿ ಕನ್ಸ್ಟ್ರಕ್ಷನ್ ಲೋ.ಇ 1 ನೇ ದರ್ಜೆ ಗುತ್ತಿಗೆದಾರರು ಮೈಸೂರು. ಇವರಿಗೆ ಟೆಂಡರ್ ಆದಾರದ ಮೇಲೆ ವಹಿಸಲಾಗಿರುತ್ತದೆ.<br>• ಟೆಂಡರ್ ಕರಾರಿನಂತೆ ಕಾಮಗಾರಿಯನ್ನು ದಿನಾಂಕ: 05-03-2020 ರಂದು ಪ್ರಾರಂಬಿಸಿ, ದಿನಾಂಕ: 04-09-2020ಕ್ಕೆ ಪೂರ್ಣಗೊಳಿಸಬೇಕಾಗಿರುತ್ತದೆ.<br>• ಕೋವಿಡ್-19ರ ಕಾರಣದಿಂದಾಗಿ ದಿನಾಂಕ:14-09-2020 ರಂದು ಕಾಮಗಾರಿಯ ಸ್ಥಳವನ್ನು ಗುತ್ತಿಗೆದಾರರಿಗೆ ಹಸ್ತಾಂತರಿಸಲಾಗಿದ್ದು, ಅದರಂತೆ ಕಾಮಗಾರಿಯನ್ನು ದಿನಾಂಕ:13-03-2021 ರಂದು ಪೂರ್ಣಗೊಳಿಸಬೇಕಾಗಿರುತ್ತದೆ. |
| ಆ | ಸದರಿ ಕಾಮಗಾರಿ ಕಳಪೆ ಗುಣಮಟ್ಟದಿಂದ ಕೂಡಿದ್ದು, ಅಂದಾಜು ಪಟ್ಟಿಯಲ್ಲಿರುವಂತೆ ಕಾಮಗಾರಿ ಪೂರೈಸದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ ಗುಣಮಟ್ಟ ಪರಿಶೀಲಿಸಲು ಸರ್ಕಾರ ಕೈಗೊಂಡ ಕ್ರಮಗಳೇನು (ವಿವರ ನೀಡುವುದು) | ಸದರಿ ಕಾಮಗಾರಿಯನ್ನು ಅನುಮೋದಿತ ಅಂದಾಜು ಪಟ್ಟಿಯಂತೆ ನಿರ್ವಹಿಸಲಾಗುತ್ತಿದ್ದು ಕಾಮಗಾರಿಯ ಪ್ರತಿ ಹಂತದಲ್ಲೂ ಗುಣಭರವಸೆ ಅಧಿಕಾರಿಗಳಿಂದ ಪರಿವೀಕ್ಷಣೆಗೊಳಪಡಿಸಿಕೊಂಡು ಕಾಮಗಾರಿಯನ್ನು ನಿರ್ವಹಿಸಲಾಗುತ್ತಿದೆ. |
| ಇ | ಕಾಮಗಾರಿ ವಿಳಂಬದಿಂದ ಸುತ್ತಮುತ್ತಲಿನ ಸಾರ್ವಜನಿಕರಿಗೆ ದಿನನಿತ್ಯ ತಾಲ್ಲೂಕು ಕೇಂದ್ರಕ್ಕೆ ಓಡಾಡಲು ತುಂಬಾ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ಬಂದಿದ್ದಲ್ಲಿ ತುರ್ತಾಗಿ ಕಾಮಗಾರಿಯನ್ನು ಗುಣಮಟ್ಟದಿಂದ ಯಾವ ಕಾಲಮಿತಿಯೊಳಗೆ ಪೂರ್ಣಗೊಳಿಸಲಾಗುವುದು (ವಿವರ ನೀಡುವುದು) | • ಕೋವಿಡ್-19 ನಿಂದಾಗಿ ಕೆಲಸಗಾರರು ಹಾಗೂ ಸಾಮಗ್ರಿಗಳು ಲಭ್ಯವಿಲ್ಲದೆ ಸುಮಾರು ಆರು ತಿಂಗಳು ಕೆಲಸ ಸ್ಥಗಿತಗೊಂಡಿದ್ದರಿಂದ ಕಾಮಗಾರಿ ವಿಳಂಭವಾಗಿರುತ್ತದೆ.<br>• ಸದರಿ ಕಾಮಗಾರಿಯ ವೆಟ್ ಮಿಕ್ಸ್ ಮುಗಿದಿದ್ದು, ಶೀಘ್ರದಲ್ಲೇ ಡಾಂಬರೀಕರಣ ಮಾಡಿ ದಿನಾಂಕ:13-03-2021 ರೊಳಗೆ ಪೂರ್ಣಗೊಳಿಸಿ, ಸಾರ್ವಜನಿಕರಿಗೆ ಹಾಗೂ ಸುಗಮ ವಾಹನ ಸಂಚಾರಕ್ಕೆ ಅನುವುಮಾಡಿಕೊಡಲಾಗುವುದು |
| ಈ | ಸಂಬಂಧಪಟ್ಟ ಗುತ್ತಿಗೆದಾರರ ಮತ್ತು ಇಲಾಖಾ ಅಧಿಕಾರಿಗಳ ವಿರುದ್ಧ ಕೈಗೊಳ್ಳಲಾದ ಶಿಸ್ತು ಕ್ರಮಗಳೇನು (ವಿವರ ನೀಡುವುದು) | ಕೋವಿಡ್-19 ರ ಕಾರಣದಿಂದಾಗಿ ಕಾಮಗಾರಿ ವಿಳಂಬವಾಗಿದ್ದು, ಸದರಿ ಕಾಮಗಾರಿಗಳನ್ನು ಶೀಘ್ರವಾಗಿ ಪೂರ್ಣಗೊಳಿಸಲು ಉಪವಿಭಾಗ ಕಛೇರಿಯಿಂದ ಸಂಬಂಧಪಟ್ಟ ಗುತ್ತಿಗೆದಾರರಿಗೆ ತಿಳುವಳಿಕೆ ಪತ್ರ ನೀಡಲಾಗಿದ್ದು, ಶಿಸ್ತು ಕ್ರಮ ಕೈಗೊಳ್ಳಬೇಕಾದ ಪ್ರಮೇಯ ಉದ್ಭವಿಸುವುದಿಲ್ಲ. |

ಲೋಇ 110 ಸಿಕ್ಯೂಎನ್ 2020(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ